KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೩ | ಬೆಂಗಳೂರು, ಗುರುವಾರ, ಜೂನ್ ೧೯, ೨೦೦೮ (ಜೇಷ್ಠ ೨೯, ಶಕ ವರ್ಷ ೧೯೩೦) | ಸಂಚಿಕೆ ೨೫ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ ರಾಮು, ಕೆ ಎ ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಮೈಸೂರು ಇವರ ವಿರುದ್ದ ಇಲಾಖಾ ವಿಚಾರಣೆ - ಅಂತಿಮ ಆದೇಶ

**ಓದಲಾಗಿದೆ: 1** ದಿನಾಂಕಃ 23-11-07 ರ ನೋಟೀಸು ಸಂಖ್ಯೆಃ ಸಿಆಸುಇ 281 ಕೇವಿ 07

**2** ಶ್ರೀ ಬಿ ರಾಮು, ಕೆ ಎ ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಮೈಸೂರು ಇವರ ರಕ್ಷಣಾತ್ಮಕ ಲಿಖಿತ ಹೇಳಿಕೆ ದಿನಾಂಕಃ 27-12-07 ಮತ್ತು 28-12-07

ಪ್ರಸ್ತಾವನೆಃ

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ಬಿ ರಾಮು, ಕೆ ಎ ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಮೈಸೂರು ಇವರು ಈ ಹಿಂದೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರನ್ನು ಶ್ರೀ ಮಹಮದ್ ಗೌಸ್ ಮತ್ತು ಮತ್ತಿತರರ ವಿರುದ್ದದ ಜಂಟೀ ಇಲಾಖಾ ವಿಚಾರಣೆಗೆ ಮಂಡನಾಧಿಕಾರಿಯಾಗಿ ನೇಮಿಸಲಾಗಿದ್ದರೂ, ವಿಚಾರಣೆಗೆ ಹಾಜರಾಗದೆ, ಮಂಡನಾಧಿಕಾರಿಯ ಕರ್ತವ್ಯವನ್ನು ವ್ಯವಸ್ಥಿತ ರೀತಿಯಲ್ಲಿ ನಿರ್ವಹಿಸದ ಕಾರಣ, ವಿಚಾರಣಾಧಿಕಾರಿಯವರು ದೋಷಯುಕ್ತ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಕಾರಣರಾಗುವ ಮೂಲಕ ಎಸಗಿದ ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಇವರ ಹೇಳಿಕೆ / ಸಮಜಾಯಿಷಿ ಪಡೆಯಲು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11 ರನ್ವಯ ದೋಷಾರೋಪಣ ಪಟ್ಟಿಯನ್ನು ನೋಟೀಸಿನೊಂದಿಗೆ ಜಾರಿಗೊಳಿಸಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ಶ್ರೀ ಬಿ ರಾಮು, ಕೆ ಎ ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಮೈಸೂರು ಇವರು ಸಲ್ಲಿಸಿದ ರಕ್ಷಣಾತ್ಮಕ ಲಿಖಿತ ಹೇಳಿಕೆಯಂತೆ, ಕೆಲವೊಂದು ಬಾರಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರ ನಿರ್ದೇಶನದಂತೆ ಮಂಡನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಲು ಇವರಿಗೆ ಸಾಧ್ಯವಾಗದೇ ಇರುವುದು, ವಿಚಾರಣಾಧಿಕಾರಿಗಳು ವಿಚಾರಣಾ ದಿನಾಂಕವನ್ನು ನಿಗಧಿಪಡಿಸಿ ಮಂಡನಾಧಿಕಾರಿಯವರಿಗೆ ತಿಳಿಸದೇ ಇರುವುದು ಮತ್ತು ಶ್ರೀ ಮಹಮದ್ ಗೌಸ್ ಮತ್ತು ಇತರರ ವಿರುದ್ದದ ಜಂಟೀ ಇಲಾಖಾ ವಿಚಾರಣೆಯಲ್ಲಿ ಆರೋಪಿತರು ದೋಷಮುಕ್ತರೆಂದು ವಿಚಾರಣಾ ವರದಿ ಸಲ್ಲಿಸಲು ಇವರು ಕಾರಣಕರ್ತರಲ್ಲವೆಂದು ತಿಳಿದುಬರುವ ಕಾರಣ ಹಾಗೂ ವಿಚಾರಣಾಧಿಕಾರಿಗಳು ಮತ್ತು ಮಂಡನಾಧಿಕಾರಿಗಳ ನಡುವೆ ಸಂಪರ್ಕದ ಕೊರತೆಯಿಂದಾಗಿ ಈ ಆರೋಪ

ಉದ್ಭವಿಸಿರುವುದು ಕಂಡು ಬಂದಿರುವ ಹಿನ್ನೆಲೆಯಲ್ಲಿ, ಇವರ ರಕ್ಷಣಾತ್ಮಕ ಹೇಳಿಕೆಯನ್ನು ಸರ್ಕಾರವು, ಕೂಲಂಕಷವಾಗಿ ಪರಿಶೀಲಿಸಿದ ನಂತರ ಅಂಗೀಕರಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 281 ಕೆಇವಿ 07, ಬೆಂಗಳೂರು, ದಿನಾಂಕಃ 3 ನೇ ಮೇ, 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ಬಿ ರಾಮು, ಕೆ ಎ ಎಸ್ (ಕಿರಿಯ ಶ್ರೇಣಿ), ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಮೈಸೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ,1957 2ರ ನಿಯಮ 11 ರನ್ವಯ ದೋಷಾರೋಪಣ ಪಟ್ಟಿಯೊಂದಿಗೆ ದಿನಾಂಕಃ 23-11-07 ರಂದು ಜಾರಿಗೊಳಿಸಿದ ನೋಟೀಸಿಗೆ ಇವರು ದಿನಾಂಕಃ 27-12-07 ಮತ್ತು 28-12-07 ರಂದು ಸಲ್ಲಿಸಿದ ಲಿಖಿತ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸಿ, ಇವರು ಇನ್ನು ಮುಂದೆ ಸರ್ಕಾರಿ ಕೆಲಸದ ಕಾರ್ಯನಿರ್ವಹಣೆಯಲ್ಲಿ ಹೆಚ್ಚಿನ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಈ ಮೂಲಕ ಎಚ್ಚರಿಕೆ ನೀಡುತ್ತಾ, ಇವರ ವಿರುದ್ದದ ಇಲಾಖಾ ವಿಚಾರಣೆಯನ್ನು ಮುಂದುವರಿಸದಿರಲು ನಿರ್ಣಯಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್ ಆರ್ ನಾಗೇಂದ್ರ**

ಪಿ.ಆರ್. 759

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ.ಬಿ.ರಂಗಸ್ವಾಮಿ,ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು- ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ: 1** ಸರ್ಕಾರಿ ಆದೇಶ ಸಂಃಸಿಅಸುಇ 107 ಎಸ್ಇಎನ್ 1994, ದಿಃ13.09.2005.

**2** ವಿಚಾರಣಾಧಿಕಾರಿ ರವರ ವರದಿ ದಿಃ07-01-08

**3** ವಿಚಾರಣಾಧಿಕಾರಿ ರವರ ಮನವಿ ದಿಃ09-01-08

<u>ಪ್ರಸ್ತಾವನೆಃ</u>

ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ.ಮಹಮದ್ ಗೌಸ್, ಕೆ.ಎ.ಎಸ್(ನಿವೃತ್ತ) ಅಧಿಕಾರಿ ಇವರು 1994-95ನೇ ಸಾಲಿನಲ್ಲಿ ಉಪ ವಿಭಾಗಾಧಿಕಾರಿ ನಂಜನಗೂಡು,ಮೈಸೂರು ಜಿಲ್ಲೆ ಹಾಗೂ ಅರಣ್ಯ ವ್ಯವಸ್ಥಾಪನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಯಳಂದೂರು ಹಾಗೂ ಚಾಮರಾಜನಗರ ತಾಲ್ಲೂಕಿನಲ್ಲಿ ರಕ್ಷಿತ ಅರಣ್ಯ ಪ್ರದೇಶವಾಗಿ ಘೋಷಿಸಲು ಮೀಸಲಿಟ್ಟ ಅತ್ಯಂತ ಬೆಲೆಬಾಳುವ ಭೂಮಿಯನ್ನು ಖಾಸಗಿಯವರಿಗೆ ಬಿಟ್ಟುಕೊಡಲು ನೆರವಾಗಿ, ಒಬ್ಬ ಸರ್ಕಾರಿ ಅಧಿಕಾರಿಯಾಗಿ ಅದರಲ್ಲೂ ಒಬ್ಬ ಅರೆ ನ್ಯಾಯಿಕ ಅಧಿಕಾರಿ(Quasi-Judicial Officer) ಯಾಗಿ ಪ್ರಾಮಾಣಿಕತೆಯನ್ನು ಮೆರೆಯುವಲ್ಲಿ ವಿಫಲರಾಗಲು ಕಾರಣರಾಗಿರುವ ಅರೋಪದ ಸತ್ಯಾಸತ್ಯತೆಯನ್ನು ತಿಳಿಯಲು ಶ್ರೀ.ಬಿ.ರಂಗಸ್ವಾಮಿ,ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಃ(2) ರಲ್ಲಿ ಓದಲಾದ ದಿಃ07-01-08 ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶಃ

**ಸರ್ಕಾರಿ ಆದೇಶ ಸಂಃಸಿಅಸುಇ 107 ಎಸ್ಇಎನ್ 94(ಸಿಅಸುಇ 203 ಕೆಇವಿ 07) ಬೆಂಗಳೂರು,ದಿನಾಂಕಃ18ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ.ಬಿ.ರಂಗಸ್ವಾಮಿ,ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ,ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಃಸಿಅಸುಇ 16 ಸೇಇವಿ 05 ದಿಃ23-08-05 ರನ್ವಯ ರೂಃ6000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಃಸಿಅಸುಇ 45 ಸೇಇವಿ 01 ದಿಃ04-03-02 ರನ್ವಯ ರೂಃ1000.00(ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಅಯವ್ಯಯ ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01,ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು ರಡಿ ಭರಿಸತಕ್ಕದ್ದು.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್.ನಾಗೇಂದ್ರ**

ಪಿ.ಆರ್. 518

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಅಸುಇ (ಸೇವೆಗಳು-2).

**ವಿಷಯ:** ಶ್ರೀ.ಅಬ್ದುಲ್ ರಹೀಂ, ಕೆ.ಎ.ಎಸ್(ನಿವೃತ್ತ)ಅಧಿಕಾರಿ ಇವರ ವಿರುದ್ದ ಇಲಾಖಾ ವಿಚಾರಣೆ ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ: 1** ಸರ್ಕಾರಿ ಆದೇಶ ಸಂಃ ಸಿಆಸುಇ 50 ಎಸ್‌ಇಎನ್ 07, ದಿಃ 07-04-07

**2** ವಿಚಾರಣಾ ವರದಿ ಸಂಃ ಲೋಕ್ಃಎಆರ್‌ಇ-4ಃಇಎನ್‌ಕ್ಯೂ-30ಃ2007 ದಿಃ11-03-08.

**3** ಸನ್ಮಾನ್ಯ ಲೋಕಾಯುಕ್ತರ ಪತ್ರ ಸಂಃ ಲೋಕ್ಃಎಆರ್‌ಇ-4ಃಇಎನ್‌ಕ್ಯೂ-30ಃ2007 ದಿಃ18-03-08.

**ಪ್ರಸ್ತಾವನೆಃ**

ಶ್ರೀ.ಅಬ್ದುಲ್‌ರಹೀಂ,ಕೆ.ಎ.ಎಸ್ (ನಿವೃತ್ತ)ಅಧಿಕಾರಿ ರವರು ವಿಶೇಷ ಭೂಸ್ವಾಧೀನಾಧಿಕಾರಿಗಳ ಹಾಗೂ ಎಸ್ಟೇಟ್ ಅಧಿಕಾರಿಗಳ ಕಛೇರಿ,ರಾಷ್ಟ್ರೀಯ ಹೆದ್ದಾರಿ ಬೆಂಗಳೂರು ರಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ರಾ.ಹೆ.4 ರ ನೆಲಮಂಗಲ-ತುಮಕೂರು ರಸ್ತೆ ವಿಸ್ತರಣೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಃ ಕಸಬಾ ಹೋಬಳಿ ತೋಣಚಿನಕೊಪ್ಪೆ ಗ್ರಾಮದ ಸ.ನಂಃ8 ಮತ್ತು 9 ರಲ್ಲಿನ 21 ಗುಂಟೆ ಮತ್ತು 10 ಗುಂಟೆ ಜಮೀನಿನ ಭೂಸ್ವಾಧೀನದ ಸಂಬಂಧ ಪರಿಹಾರ ಧನ ಪಾವತಿ ಮಾಡುವುದರಲ್ಲಿ ಅವರ ಅಧಿಕಾರ ದುರುಪಯೋಗಪಡಿಸಿಕೊಂಡಿದ್ದಾರೆಂದು ಶ್ರೀ.ಜಿ.ಕೆ.ಶಿವಕುಮಾರ್,ಬೆಂಗಳೂರು ರವರು ಸಲ್ಲಿಸಿದ ದೂರಿನ ಮೇರೆಗೆ ತನಿಖೆಯನ್ನು ನಡೆಸಿದ ಸನ್ಮಾನ್ಯ ಲೋಕಾಯುಕ್ತರು ಕಾಯ್ದೆ ಕಲಂ12(3) ರನ್ವಯ ಸದರಿ ಅಧಿಕಾರಿಯವರ ವಿರುದ್ದ ಮಾಡಿರುವ ಆರೋಪವು ಮೇಲ್ನೋಟಕ್ಕೆ ಸತ್ಯವೆಂದು ತಿಳಿಸಿ ಅವರ ವಿರುದ್ದ ಪೂರ್ಣ ಪ್ರಮಾಣದ ತನಿಖೆಗಾಗಿ ಸಿ.ಸಿ.ಎ ನಿಯಮ 14-ಎ ರಡಿ ತಮಗೆ ವಹಿಸುವಂತೆ ಶಿಫಾರಸ್ಸು ಮಾಡಿದ್ದರು. ಅದರಂತೆ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ 1957 ರ ನಿಯಮ 14-ಎ ರನ್ವಯ ಅವರ ವಿರುದ್ದ ಮೇಲೆ ಓದಲಾದ ಕ್ರಮ ಸಂಃ(1)ರ ಸರ್ಕಾರಿ ಆದೇಶದಲ್ಲಿ ವಿಚಾರಣೆ ನಡೆಸಲು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿತ್ತು. ಸನ್ಮಾನ್ಯ ಲೋಕಾಯುಕ್ತರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು- ವಿಚಾರಣೆ-4 ಕರ್ನಾಟಕ ಲೋಕಾಯುಕ್ತ ರವರು ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಃ(2)ರಲ್ಲಿ ವಿಚಾರಣಾ ವರದಿಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪಿತ ಅಧಿಕಾರಿ ಮೇಲೆ ಹೊರಿಸಿದಂತ ಆರೋಪವು ಸಾಬೀತಾಗಿರುವುದಿಲ್ಲವೆಂದು ನಿರ್ಣಯವನ್ನು ನೀಡಿರುತ್ತಾರೆ. ಸದರಿ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಲೋಕಾಯುಕ್ತರು ಮೇಲೆ ಓದಲಾದ ಕ್ರಮ ಸಂ.(3)ರ ಪತ್ರದಲ್ಲಿ ಆಪಾದಿತ ಅಧಿಕಾರಿಯ ವಿರುದ್ದ ಹೊರಿಸಲಾದ ಆರೋಪವು ಸಾಬೀತಾಗಿರುವುದಿಲ್ಲವೆಂಬ ನಿರ್ಣಯ ನೀಡಿರುವ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯು ಶಿಸ್ತು ಪ್ರಾಧಿಕಾರದ ಪರವಾಗಿ ನಡೆದ ವಿಚಾರಣೆಯಲ್ಲಿ,

ದಾಖಲೆಗಳ ಆಧಾರದ ಮೇಲೆ ವಿಚಾರಣಾಧಿಕಾರಿರವರು ಒಂದು ನಿರ್ಣಯಕ್ಕೆ ಬಂದು ಶಿಸ್ತು ಪ್ರಾಧಿಕಾರವು ಆರೋಪಿತ ಅಧಿಕಾರಿ ವಿರುದ್ದ ಹೊರಿಸಲಾದ ಆರೋಪಗಳನ್ನು ಸಾಬೀತುಪಡಿಸಲು ವಿಫಲವಾಗಿರುವುದರಿಂದ ಈ ಪ್ರಕರಣದಲ್ಲಿ ಭಿನ್ನವಾದ ಅಭಿಪ್ರಾಯ ನೀಡಲು ಕಾರಣವಿಲ್ಲದೆ ಇರುವುದರಿಂದ ಹಾಗೂ ಅರೋಪಿತ ಅಧಿಕಾರಿಯ ವಿರುದ್ದ ಹೊರಿಸಲಾದ ಆರೋಪಗಳು ಸಾಬೀತಾಗಿರದೇ ಇರುವುದರಿಂದ ಇವರ ವಿರುದ್ದದ ವಿಚಾರಣೆಯನ್ನು ಕೈ ಬಿಡುವಂತೆ ಶಿಫಾರಸ್ಸು ಮಾಡಿದ್ದಾರೆ. ಅದರಂತೆ ಈ ಆದೇಶಃ

**ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ 50 ಎಸ್‌ಇಎನ್ 2007(ಸಿಆಸುಇ 80 ಕೇಇವಿ 2007),**

**ಬೆಂಗಳೂರು ದಿನಾಂಕಃ 13ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ.ಅಬ್ದುಲ್ ರಹೀಂ ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಅವರನ್ನು ದಿಃ07-04-2007 ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್.ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

ಪಿ.ಆರ್. 788

**ವಿಷಯ:** ಶ್ರೀ ಶಂಕರಪ್ಪ, ಕೆಎಎಸ್ (ಹಿ.ಶ್ರೇ) ಅಧಿಕಾರಿ ಅಂದಿನ ಉಪ ವಿಭಾಗಾಧಿಕಾರಿ, ಕೊಳ್ಳೇಗಾಲ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ ಸಂಬಂಧ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ – ಆದೇಶ.

**ಓದಲಾಗಿದೆ: 1** ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಂ–27/ಸಿಆರ್–1/2007–ಸಿಎಂಆರ್, ದಿನಾಂಕ: 3.7.2007, 28.3.2008 ಮತ್ತು 2.5.2008.

**2** ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 299 ಕೆಇವಿ 2007, ದಿನಾಂಕ: 22.4.2008.

**ಪ್ರಸ್ತಾವನೆ:**

ಶ್ರೀ ಶಂಕರಪ್ಪ, ಕೆಎಎಸ್ (ಹಿ.ಶ್ರೇ) ಅಧಿಕಾರಿ ಇವರು ಕೊಳ್ಳೇಗಾಲ ಉಪ ವಿಭಾಗಾಧಿಕಾರಿಯಾಗಿ ಹಾಗೂ ಶ್ರೀ ಎಂ.ಸಿದ್ದಮಲ್ಲಪ್ಪ ಇವರು ಕೊಳ್ಳೇಗಾಲ ಉಪ ವಿಭಾಗಾಧಿಕಾರಿಯವರ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ

ಕಾರ್ಯನಿರ್ವಹಿಸುತ್ತಿದ್ದಾಗ ಇವರು ಫಿರ್ಯಾದುದಾರರಾದ ಶ್ರೀ ನಿಸಾರ್‌ಖಾನ್ ಬಿನ್ ರೆಹಮತ್‌ವುಲ್ಲಾಖಾನ್ ಇವರಿಗೆ ಅವರ ಜಮೀನಿನ ಖಾತೆಗೆ ಸಂಬಂಧಿಸಿದಂತೆ ಪಡೆದುಕೊಂಡಿರುವ ಆರ್.ಟಿ.ಸಿ.ಯಲ್ಲಿ ಎಲ್.ಆರ್.ಎಫ್. ಅನ್ನು ತೆರವುಗೊಳಿಸಲು ಕ್ರಮವಾಗಿ ರೂ. 5,000.00 ಮತ್ತು ರೂ. 500.00 ಗಳ ಲಂಚದ ಹಣಕ್ಕಾಗಿ ಒತ್ತಾಯ ಮಾಡುತ್ತಿದ್ದಾರೆಂದು ಫಿರ್ಯಾದುದಾರರು ನೀಡಿದ ದೂರಿನ ಮೇರೆಗೆ ಪೋಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಾಮರಾಜನಗರ ಇವರು ಆರೋಪಿತ ಅಧಿಕಾರಿ / ನೌಕರರ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ 13 (2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ: 1/2007ರಲ್ಲಿ ಪ್ರಕರಣವನ್ನು ದಿನಾಂಕ: 30.6.2007 ರಂದು ದಾಖಲಿಸಿಕೊಂಡಿರುವುದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 3.7.2007ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಅಪರ ಪೋಲೀಸ್ ಮಹಾ ನಿರ್ದೇಶಕರು ವರದಿ ಮಾಡಿರುತ್ತಾರೆ. ಸದರಿ ವರದಿಯಲ್ಲಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಲಾಗಿದೆ.

ದಿನಾಂಕ: 30.6.2007 ರಂದು ಶ್ರೀ ಶಂಕರಪ್ಪ, ಅಂದಿನ ಉಪ ವಿಭಾಗಾಧಿಕಾರಿ ಕೊಳ್ಳೇಗಾಲ ಮತ್ತು ಶ್ರೀ ಎಂ.ಸಿದ್ದಮಲ್ಲಪ್ಪ, ಪ್ರಥಮ ದರ್ಜೆ ಸಹಾಯಕರು, ಉಪ ವಿಭಾಗಾಧಿಕಾರಿಗಳ ಕಛೇರಿ, ಕೊಳ್ಳೇಗಾಲ ತಾಲ್ಲೂಕು ಇವರು ತಾವು ಒತ್ತಾಯ ಮಾಡಿದ ಲಂಚದ ಹಣ ಕ್ರಮವಾಗಿ ರೂ. 5,000.00 ಮತ್ತು ರೂ. 500.00 ಗಳನ್ನು ತಮ್ಮ ಕಛೇರಿಯಲ್ಲಿ ಫಿರ್ಯಾದುದಾರರಿಂದ ಸ್ವೀಕರಿಸಿ ಲೋಕಾಯುಕ್ತ ಬಲೆಗೆ ಸಿಕ್ಕಿ ಬಿದ್ದಿರುತ್ತಾರೆ. ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಆರೋಪಿತ 01 ಮತ್ತು 02 ರವರ ಎರಡೂ ಕೈಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿದಾಗ ದ್ರಾವಣವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ಈ ಮೂಲಕ ಆಪಾದಿತರು ಲಂಚದ ಹಣವನ್ನು ಸ್ವೀಕರಿಸಿರುವುದು ರುಜುವಾತಾಗಿರುವುದಾಗಿ ಹಾಗೂ ಈ ಲಂಚದ ಹಣವನ್ನು ಆರೋಪಿತರಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ ಎಂದು ವರದಿ ಮಾಡಿರುತ್ತಾರೆ.

ಆಪಾದಿತ ಅಧಿಕಾರಿಯಾದ ಶ್ರೀ ಶಂಕರಪ್ಪ, ಉಪ ವಿಭಾಗಾಧಿಕಾರಿ, ಕೊಳ್ಳೇಗಾಲ ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡಲು ಹಾಗೂ ಇವರ ಲೀನ್ (ಸ್ಥಾನ) ಅನ್ನು ಬೇರೆ ಕಡೆಗೆ ವರ್ಗಾಯಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 3.7.2007ರ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶ್ರೀ ಶಂಕರಪ್ಪ, ಕೆಎಎಸ್ ಅಧಿಕಾರಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವುದರ ಬದಲು ಅವರನ್ನು ಟ್ರ್ಯಾಪ್ ನಡೆದ ಜಾಗದಿಂದ ದೂರದ ಜಾಗಕ್ಕೆ ನೇಮಿಸಲು ಸರ್ಕಾರವು ನಿರ್ಣಯಿಸಿ ಅದರಂತೆ ಅವರನ್ನು ಕೊಳ್ಳೇಗಾಲ ಉಪ ವಿಭಾಗದಿಂದ ಸರ್ಕಾರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು ಇಲ್ಲಿಗೆ ವರ್ಗಾಯಿಸಲಾಗಿದೆ. ಈ ಅಂಶವನ್ನು ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿ ಈ ಪ್ರಕರಣದಲ್ಲಿ ಅಂತಿಮ ವರದಿಯನ್ನು ಕಳುಹಿಸಿಕೊಡುವಂತೆ ಕೋರಲಾಗಿತ್ತು.

ಈ ಮಧ್ಯೆ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 2.5.2008ರ ಪತ್ರದಲ್ಲಿ ಶ್ರೀ ಶಂಕರಪ್ಪ, ಕೆಎಎಸ್ ಮತ್ತು ಶ್ರೀ ಸಿದ್ದಮಲ್ಲಪ್ಪ, ಪ್ರಥಮ ದರ್ಜೆ ಸಹಾಯಕರು ಇವರು ಲಂಚ ಸ್ವೀಕರಿಸಿರುವಾಗ ನೇರವಾಗಿ ಸಿಕ್ಕಿ ಬಿದ್ದಿದ್ದು, ಈಗಾಗಲೇ ಶ್ರೀ ಸಿದ್ದಮಲ್ಲಪ್ಪ, ಪ್ರ.ದ.ಸ. ಇವರನ್ನು ಕರ್ತವ್ಯದಿಂದ ಅಮಾನತ್ತು ಮಾಡಲಾಗಿದ್ದು, ಆದರೆ ಶ್ರೀ ಶಂಕರಪ್ಪ, ಕೆಎಎಸ್ ಇವರನ್ನು ಇನ್ನೂ ಅಮಾನತ್ತು ಪಡಿಸದ ಕಾರಣ ಅವರನ್ನು ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಿಯಮ 10ರ ಪ್ರಕಾರ ಅಮಾನತ್ತುಗೊಳಿಸುವಂತೆ ಕೋರಿರುತ್ತಾರೆ.

ಕರ್ನಾಟಕ ಲೋಕಾಯುಕ್ತದ ಅಪರ ಪೋಲೀಸ್ ಮಹಾ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆಪಾದಿತ ಅಧಿಕಾರಿಯಾದ ಶ್ರೀ ಶಂಕರಪ್ಪ ಇವರು ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಚಾಮರಾಜನಗರ ಲೋಕಾಯುಕ್ತ ಪೋಲೀಸರಿಗೆ ನೇರವಾಗಿ ಸಿಕ್ಕಿ ಬಿದ್ದಿದ್ದರಿಂದಲೂ, ಫಿನಾಪ್ತಲೀನ್ ಪರೀಕ್ಷೆಯಲ್ಲಿ ಸಕಾರಾತ್ಮಕ ಫಲಿತಾಂಶ ಬಂದಿರುವುದರಿಂದಲೂ, ಆಪಾದಿತರ ಭ್ರಷ್ಟಾಚಾರವು ಮೇಲ್ನೋಟಕ್ಕೆ ಸಾಬೀತು ಪಡುವುದರಿಂದಲೂ, ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ಶ್ರೀ ಶಂಕರಪ್ಪ, ಕೆಎಎಸ್ ಅಧಿಕಾರಿ ಇವರನ್ನು ಮುಂದಿನ ತನಿಖೆ / ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 299 ಕೆಇವಿ 2007, (ಸಿಆಸುಇ 187 ಎಸ್‌ಇಎನ್ 2007)**

**ಬೆಂಗಳೂರು, ದಿನಾಂಕ: 12ನೇ ಮೇ, 2008.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಶಂಕರಪ್ಪ, ಕೆಎಎಸ್ (ಹಿ.ಶ್ರೇ) ಅಧಿಕಾರಿ ಅಂದಿನ ಉಪ ವಿಭಾಗಾಧಿಕಾರಿ, ಕೊಳ್ಳೇಗಾಲ ಉಪ ವಿಭಾಗ ಹಾಲಿ ಮುಖ್ಯ ಆಡಳಿತಾಧಿಕಾರಿ, ಸರ್ಕಾರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ,

ರಾಯಚೂರು ಇವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಶಂಕರಪ್ಪ, ಕೆಎಎಸ್ ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಶಂಕರಪ್ಪ, ಕೆಎಎಸ್ ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಸದರಿ ಅಧಿಕಾರಿಯ ಸ್ಥಾನಕ್ಕೆ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆಯನ್ನು ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರು ಕ್ರಮವನ್ನು ಕೈಗೊಳ್ಳುತ್ತಾರೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 793

**ಎಚ್.ಆರ್.ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2).

**ವಿಷಯ:** ಜಿಲ್ಲಾ ನ್ಯಾಯಾಧೀಶರು ಮತ್ತು ಸಿವಿಲ್ ನ್ಯಾಯಾಧೀಶರ ಸೇವೆಯನ್ನು 58 ವರ್ಷಗಳ ವಯೋಮಿತಿ ನಂತರ 60 ವರ್ಷಗಳವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪತ್ರ ಸಂ. ಜಿಓಬಿ(1) 250/2007, ದಿನಾಂಕ 11–4–2008.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರುಗಳ / ಫಾಸ್ಟ್ ಟ್ರಾಕ್ ಕೋರ್ಟ್ / ಸಿವಿಲ್ ನ್ಯಾಯಾಧೀಶರು (ಸೀನಿಯರ್ ಡಿವಿಷನ್) ಹುದ್ದೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿರುವ ನ್ಯಾಯಾಂಗ ಅಧಿಕಾರಿಗಳನ್ನು 58 ವರ್ಷಗಳ ವಯೋಮಿತಿ ನಂತರವೂ ಮುಂದುವರಿಸುವ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷಗಳ ವಯೋಮಿತಿ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದ್ದಲ್ಲಿ ಕರ್ನಾಟಕ ನಾಗರೀಕಾ ಸೇವಾ ನಿಯಮಾವಳಿಯ ನಿಯಮ 95(ಎ)ರನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳ ವಯಸ್ಸಿನವರೆಗೆ ಮುಂದುವರಿಸಬಹುದಾಗಿದೆ. ಅದರಂತೆ ಕೆಳಕಂಡ 3 ಜಿಲ್ಲಾ ನ್ಯಾಯಾಧೀಶರುಗಳ ಗೌಪ್ಯ ವರದಿ ಹಾಗೂ ಇತರೆ ದಾಖಲೆಗಳನ್ನು ಪರಿಶೀಲಿಸಿ ಇವರುಗಳನ್ನು 60 ವರ್ಷಗಳ ವಯೋಮಿತಿಯವರೆಗೆ ಮುಂದುವರೆಸಲು ನ್ಯಾಯಾಲಯದ ಪೂರ್ಣ ಪೀಠವು ಅನುಮೋದಿಸಿರುವುದಾಗಿ ಮೇಲೆ ಓದಲಾದ ದಿನಾಂಕ 11–4–2008ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ತಿಳಿಸಿರುತ್ತಾರೆ. ಅದರಂತೆ ಕೆಳಕಂಡ 3 ಜಿಲ್ಲಾ ನ್ಯಾಯಾಧೀಶರುಗಳು, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕದಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿದ್ದು ಇವರುಗಳ ಸೇವೆಯನ್ನು 58 ವರ್ಷಗಳ ನಂತರ 60 ವರ್ಷಗಳವರೆಗೆ ಸೇವೆಯನ್ನು ಮುಂದುವರಿಸಲು ಸರ್ಕಾರದ ಆದೇಶ ಕೋರಲಾಗಿದೆ.

| Sl. No. | Name and Designation of the Officer Sriyuths/Smts:- | Date of Superannuation On attaining the age of 58 years |
|---|---|---|
| 1 | K.B.M. Patel | 31-5-2008 |
| 2 | Narasimha S Kulkarni | 30-6-2008 |
| 3 | K.V. Krishnamurthy | 30-6-2008 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸೇಉನ್ಯಾ 2008, ಬೆಂಗಳೂರು, ದಿನಾಂಕ 13ನೇ ಮೇ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡ 3 ಜಿಲ್ಲಾ ನ್ಯಾಯಾಧೀಶರು/ಫಾಸ್ಟ ಟ್ರಾಕ್ ಕೋರ್ಟ್/ಸಿವಿಲ್ ನ್ಯಾಯಾಧೀಶರು (ಸೀನಿಯರ್ ಡಿವಿಷನ್) ರವರುಗಳ ಸೇವೆಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕದಂದು 58 ವರ್ಷಗಳ ವಯೋ ಮಿತಿಯನ್ನು ಪೂರೈಸಿದ ನಂತರವೂ ಕರ್ನಾಟಕ ನಾಗರೀಕಾ ಸೇವಾ ನಿಯಮಾವಳಿಯ ನಿಯಮ 95(ಎ)ರನ್ವಯ 60 ವರ್ಷಗಳ ವಯೋಮಿತಿಯವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರವು ಆದೇಶಿಸಿದೆ.

| Sl. No. | Name and Designation of the Officer Sriyuths/Smts:- | Date of Superannuation On attaining the age of 58 years |
|---|---|---|
| 1 | K.B.M. Patel, Civil Judge (Senior Division) and JMFC, Jamkhandi | 31-5-2008 |

| | | |
|---|---|---|
| 2 | Narasimha S Kulkarni, District Judge, OOD, Central Project Co-ordinator, HCK, Bangalore | 30-6-2008 |
| 3 | K.V. Krishnamurthy, District & Sessions Judge, Koppal | 30-6-2008 |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್,**

ಪಿ.ಆರ್. 785

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಬಹುದೂರದ ಮತ್ತು ಒಳಭಾಗದ ಪ್ರದೇಶಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು (ನಕ್ಸಲ್ ಬಾಧಿತ ಪ್ರದೇಶಗಳ ಅಭಿವೃದ್ಧಿ ಕಾರ್ಯಕ್ರಮ) ತೆಗೆದುಕೊಳ್ಳಲು ಅನುದಾನ ಬಿಡುಗಡೆ ಮಾಡುವ ಕುರಿತು.

**ಉಲ್ಲೇಖ:-** 1) ಸರ್ಕಾರದ ಸುತ್ತೋಲೆ ನಂ ಗ್ರಾಅಪ 35 ಯೋಉಮಾ 2006, ದಿನಾಂಕ 05/04/2006.

2) ದಿನಾಂಕ 17/11/2006 ಮತ್ತು 18/10/2007 ರಂದು ಮಾನ್ಯ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿಜರುಗಿದ ನಕ್ಸಲ್ ಬಾಧಿತ ಪ್ರದೇಶಗಳ ಅಭಿವೃದ್ಧಿ ಸಭೆಯ ನಡವಳಿಗಳು.

3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.ಆಇ/1022.ವೆಚ್ಚ6/2007 ದಿನಾಂಕ 6.11.2007.

**ಪ್ರಸ್ತಾವನೆ:-**

ಉಲ್ಲೇಖ (1) ರ ಸುತ್ತೋಲೆಯಲ್ಲಿ ನಕ್ಸಲ್ ಬಾಧಿತ ಜಿಲ್ಲೆಗಳಲ್ಲಿ ಅಭಿವೃದ್ಧಿ ಯೋಜನೆಗಳನ್ನು ತಯಾರಿಸಿ ಅನುಷ್ಠಾನಗೊಳಿಸುವ ಕುರಿತು ಮಾರ್ಗಸೂಚಿಗಳನ್ನು ನೀಡಲಾಗಿದೆ. ಉಲ್ಲೇಖ (2) ರಲ್ಲಿ ಮಾನ್ಯ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಜರುಗಿದ ನಕ್ಸಲ್ ಬಾಧಿತ ಪ್ರದೇಶಗಳ ಅಭಿವೃದ್ಧಿ (ಬಹುದೂರದ ಮತ್ತು ಒಳಭಾಗದ ಪ್ರದೇಶಗಳ ಅಭಿವೃದ್ಧಿ) ಕುರಿತ ಉನ್ನತ ಮಟ್ಟದ ಸಭಾ ನಡವಳಿಯನ್ವಯ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿರುವ ಜಿಲ್ಲಾ ಮಟ್ಟದ ಸಮಿತಿಗಳಿಗೆ ಹಣ ಬಿಡುಗಡೆ ಮಾಡಬೇಕೆಂದು ಮತ್ತು ಕೆಲಸಗಳನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳ ಗಮನಕ್ಕೆ ತಂದು ಸಮಿತಿಯ ಮೇಲ್ವಿಚಾರಣೆಯಲ್ಲಿ ಅನುಷ್ಠಾನಗೊಳಿಸಲು ಸೂಚಿಸಲಾಗಿದೆ.

ಉಲ್ಲೇಖ (3) ರ ಆರ್ಥಿಕ ಇಲಾಖೆಯ ಟಿಪ್ಪಣಿಯಲ್ಲಿ 2007-2008 ನೇ ಸಾಲಿನ ಆಯವ್ಯಯದಲ್ಲಿ ಬಹುದೂರದ ಮತ್ತು ಒಳಭಾಗದ ಪ್ರದೇಶಗಳ ಅಭಿವೃದ್ಧಿ ಕಾಮಗಾರಿಗಳಿಗಾಗಿ ಲೆಕ್ಕ ಶೀರ್ಷಿಕೆ 2515-00-196-1-22 (ಯೋಜನೆ) ಇದರಡಿಯಲ್ಲಿ ರೂ.1520-00 ಲಕ್ಷಗಳನ್ನು ಜಿಲ್ಲಾ ಪಂಚಾಯತ್‌ಗಳು ಕ್ರಿಯಾ ಯೋಜನೆ ತಯಾರಿಸಿದ್ದಲ್ಲಿ ಆ ಪ್ರಕಾರ ಜಿಲ್ಲಾ ಪಂಚಾಯತ್‌ವಾರು ಅನುದಾನ ಬಿಡುಗಡೆ ಮಾಡುವಂತೆ ತಿಳಿಸಲಾಗಿದೆ. ಸಂಬಂಧಿಸಿದ ಜಿಲ್ಲೆಗಳ ಜಿಲ್ಲಾ ಪಂಚಾಯತ್‌ಗಳಲ್ಲಿ ಕ್ರಿಯಾ ಯೋಜನೆಗಳನ್ನು ತಯಾರಿಸಿರುವುದಾಗಿ ವರದಿ ಬಂದಿರುತ್ತದೆ.ಈ ಹಿನ್ನೆಲೆಯಲ್ಲಿ ಕೆಳಗಿನ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ. ಗ್ರಾಅಪ:06:ಮಾನ್ 2007 ಬೆಂಗಳೂರು ದಿ:05ನೇ ಫೆಬ್ರವರಿ, ೨೦೦೮**

ಬಹುದೂರದ ಮತ್ತು ಒಳಭಾಗದ ಪ್ರದೇಶಗಳ ಅಭಿವೃದ್ಧಿ ಕಾರ್ಯಕ್ರಮದಡಿ 2007-2008 ನೇ ಸಾಲಿನಲ್ಲಿ ನಕ್ಸಲ್ ಬಾಧಿತ ಜಿಲ್ಲೆಗಳಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ಸಲುವಾಗಿ ಲೆಕ್ಕ ಶೀರ್ಷಿಕೆ 2515-00-196-1-22-300-ಒಟ್ಟು ಜಿಲ್ಲಾ ಪಂಚಾಯತ್ ಅಭಿವೃದ್ಧಿ ಅನುದಾನ (ಬಹುದೂರದ ಮತ್ತು ಒಳಭಾಗದ ಪ್ರದೇಶಗಳ ಅಭಿವೃದ್ಧಿ) (ಯೋಜನೆ) (ZP Code2515-00-103-0-05) ಅಡಿಯಲ್ಲಿ ಈ ಕೆಳಕಂಡ 11 ಜಿಲ್ಲಾ ಪಂಚಾಯತ್‌ಗಳಿಗೆ ಅವುಗಳ ಮುಂದೆ ತೋರಿಸಿರುವಂತೆ ರೂ.1520-00 ಲಕ್ಷಗಳನ್ನು (ರೂ.ಒಂದು ಸಾವಿರದ ಐದು ನೂರಾ ಇಪ್ಪತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ಬಿಡುಗಡೆ ಮಾಡಿರುವ ಅನುದಾನವನ್ನು ಸರ್ಕಾರಿ ಆದೇಶ ಸಂಖ್ಯೆ ಆಇ/7/ಜಡ್ ಪಿಎ/2003 ದಿನಾಂಕ 8-9-2004 ರನ್ವಯ ಖಜಾನೆಯಿಂದ ಡ್ರಾ ಮಾಡಿ ಯೋಜನೆಯ ಮಾರ್ಗಸೂಚಿಯನ್ವಯ ವಿನಿಯೋಗಿಸತಕ್ಕದ್ದು.

| ಕ್ರಸಂ | ಜಿಲ್ಲೆ | ಒದಗಿಸಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಬೀದರ | 30.00 |
| 2 | ಗುಲ್ಬರ್ಗ | 10.00 |
| 3 | ರಾಯಚೂರು | 180.00 |
| 4 | ಬಳ್ಳಾರಿ | 210.00 |
| 5 | ಚಿತ್ರದುರ್ಗ | 150.00 |
| 6 | ತುಮಕೂರು | 270.00 |
| 7 | ಕೋಲಾರ | 30.00 |

| | | |
|---|---|---|
| 8 | ಶಿವಮೊಗ್ಗ | 170.00 |
| 9 | ಚಿಕ್ಕಮಗಳೂರು | 210.00 |
| 10 | ಉಡುಪಿ | 150.00 |
| 11 | ದಕ್ಷಿಣ ಕನ್ನಡ | 110.00 |
| | **ಒಟ್ಟು ಮೊತ್ತ** | **1520.00** |

**ಮೇಲ್ಕಂಡ ಅನುದಾನವನ್ನು ಕೆಳಕಂಡ ನಿಬಂಧನೆಗಳಿಗನುಸಾರವಾಗಿ ವಿನಿಯೋಗಿಸಬೇಕು.**

(1) ಒಳಾಡಳಿತ ಇಲಾಖೆಯಿಂದ ಈಗಾಗಲೇ ಗುರುತಿಸಲ್ಪಟ್ಟ ನಕ್ಸಲ್ ಬಾಧಿತ ಪ್ರದೇಶಗಳ ಗ್ರಾಮಗಳಲ್ಲಿ ಮಾತ್ರ ವಿನಿಯೋಗಿಸಬೇಕು.

(2) ಉಲ್ಲೇಖ 1 ರ ಸರ್ಕಾರದ ಸುತ್ತೋಲೆಯನ್ವಯ ಈಗಾಗಲೇ ತಯಾರಿಸಲಾಗಿರುವ ಕಾಮಗಾರಿ-ಗಳ ಕ್ರಿಯಾ ಯೋಜನೆಗೆ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿರುವ ಜಿಲ್ಲಾ ಮಟ್ಟದ ಸಮಿತಿಯ ಸಹಮತದೊಂದಿಗೆ ಕಾಮಗಾರಿಗಳನ್ನು ಅನುಷ್ಠಾನ ಗೊಳಿಸಬೇಕು.

(3) ಈ ಅನುದಾನವನ್ನು ಮಾರ್ಗಪಲ್ಲಟ ಮಾಡಿ ಬೇರೆ ಉದ್ದೇಶಗಳಗೆ ಬಳಸಬಾರದು.

(4) ಗ್ರಾಮ ಪಂಚಾಯತಿಗಳ ಮೂಲಕ ಅನುಷ್ಠಾನಗೊಳಿಸಬೇಕು.

(5) ಪ್ರತಿ ತಿಂಗಳು ಮಾಸಿಕ ಪ್ರಗತಿ ವರದಿಯನ್ನು ಜಿಲ್ಲಾ ಪಂಚಾಯತಿಯ ಮೂಲಕ ಸರ್ಕಾರಕ್ಕೆ ಸಲ್ಲಿಸಬೇಕು.

(6) ತಾಲ್ಲೂಕು ಪಂಚಾಯ್ತಿ/ಜಿಲ್ಲಾ ಪಂಚಾಯ್ತಿಗಳ ಎಂ.ಎಂ.ಆರ್/ಇತರೆ ಸಭೆಗಳಲ್ಲಿ ಪ್ರಗತಿ ಪರಿಶೀಲನೆ ಕೈಗೊಳ್ಳಬೇಕು.

(7) ಕಾಮಗಾರಿಗಳ ಅನುಷ್ಠಾನದಲ್ಲಿ ಚಾಲ್ತಿಯಲ್ಲಿರುವ ಕರ್ನಾಟಕ ಪಾರದರ್ಶಕ ನಿಯಮಗಳನ್ನು ಪಾಲಿಸತಕ್ಕದ್ದು.

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ. ಗ್ರಾಅಪ 51 ಪಿಬಿಎಸ್ 2008 ದಿನಾಂಕ 04-02-2008 ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ಪಿ.ಆರ್. 271

ನಿರ್ದೇಶಕರು ,
ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ
ಹಾಗೂ ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ವಿಷಯ:-** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ ಇದರಡಿ ಕೇಂದ್ರ ಸರ್ಕಾರವು 2007-08 ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ತನ್ನ ಪಾಲಿನ ಅನುದಾನಕ್ಕೆ ರಾಜ್ಯದ ಪಾಲಿನ ಅನುದಾನವನ್ನು ಎರಡನೇ ಕಂತಾಗಿ ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:-** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ-12022/2/2007-NREGA Sl.No 447 ದಿನಾಂಕ: 14-01-2008 .

**ಪ್ರಸ್ತಾವನೆ:-**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2007-08 ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ರೂ. 1200.00 ಲಕ್ಷಗಳನ್ನು ಎರಡನೇ ಕಂತಾಗಿ ನೇರವಾಗಿ ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಸೂಚಿಸಿದೆ. ಅದರಂತೆಯೇ, ಮಾರ್ಗಸೂಚಿ-ಗಳನ್ವಯ, ಶೇಕಡಾ 10 ರಷ್ಟಿನ, ರಾಜ್ಯವು ತನ್ನ ಪಾಲಿನ ಎರಡನೇ ಕಂತಿನ ಅನುದಾನವಾದ ರೂ. 120.00 ಲಕ್ಷಗಳನ್ನು ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು 2007-08 ನೇ ಸಾಲಿನಲ್ಲಿ ಎಸ್‌ಜಿಆರ್‌ವೈ ಯೋಜನೆಯ ಲಿಂಕ್ ಲೆಕ್ಕಶೀರ್ಷಿಕೆಯಾದ 196 ರಲ್ಲಿ ಒದಗಿಸಲಾದ ಅನುದಾನದಿಂದ ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 03 ಉಖಾಯೋ 07, ಬೆಂಗಳೂರು ದಿನಾಂಕ 25ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ ಇದರಡಿ ಕಾಮಗಾರಿಗಳ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರದ ಆದೇಶದನ್ವಯ ಸಾಮಗ್ರಿಗಳ ಘಟಕದ ವೆಚ್ಚಕ್ಕಾಗಿ ಬಳಸಲು, ಕೇಂದ್ರ ಸರ್ಕಾರದ ಅನುದಾನಕ್ಕೆ ಪೂರಕವಾಗಿ 2007-08 ನೇ ಸಾಲಿನಲ್ಲಿ ರಾಜ್ಯದ ಪಾಲಿನ ಅನುದಾನವಾದ ರೂ. 120.00 ಲಕ್ಷ (ರೂ ಒಂದು ಕೋಟಿ ಇಪ್ಪತ್ತು ಲಕ್ಷಗಳು ಮಾತ್ರ) ಗಳನ್ನು ಎರಡನೇ ಕಂತಾಗಿ ಅನುಬಂಧದಲ್ಲಿ ನಮೂದಿಸಿದಂತೆ, ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ 8-09-2004 ಮತ್ತು ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ-1/ಜಡ್‌ಪಿಎ 2007(ಪಿ-2) ದಿನಾಂಕ 26-4-2007 ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ-1ಕ್ಕೆ

ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು ಹಾಗೂ ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಈ ಅನುದಾನದ ವೆಚ್ಚವನ್ನು ಭರಿಸತಕ್ಕದ್ದು,

1. ಜಿಲ್ಲಾ ಪಂಚಾಯತಿ 2505 ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ (2505-60-196-6-04) 2007-08 (ಯೋಜನೆ).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1-2-2007 ರಂದು ಅಧಿಸೂಚಿಸಿರುವ , ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/ 82/ಪಿಬಿಎಸ್/2008 ದಿನಾಂಕ 20-02-2008 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಂ. ಶಿರೋಳ್**
ನಿರ್ದೇಶಕರು ,
ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ
ಹಾಗೂ ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**Annexure to G.O. No. RDP/3/NRE/2007, Bangalore, Dated 25th February, 2008**
**Statement showing the release of IInd instalment of State Share of funds under SGRY during 2007-08 for utilization to the programmes of NREGA.**

(Rs. in lakhs)

| Sl. No | District | Object Code | Central release | | State share proposed for releases as per Col.5 | Funds being released in this order under H/A (2505-60-196-6-04) |
|---|---|---|---|---|---|---|
| | | | Date | Amount | | |
| 1 | 2 | 3 | 4 | 5 | 6 | 7 |
| 1 | Raichur | 420 | 14-01-08 | 1200.00 | 120.00 | 120.00 |

Director(PPMU)
Project Planning Monitoring Unit,
E/o Additional Secretary to Government
Rural Development & Pan.Raj Dept.,

ಪಿ.ಆರ್. 800

**ವಿಷಯ:-** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ ಇದರಡಿ 2007-08 ನೇ ಸಾಲಿನಲ್ಲಿ ರಾಜ್ಯದ ಪಾಲಿನ ಮೊದಲನೆ ಕಂತಿನ ಅನುದಾನವನ್ನು ಬೀದರ್ ಜಿಲ್ಲೆಗೆ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:-** 1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ-12022/4/2007-NREGA Sl.No 352 ದಿನಾಂಕ: 26-11-2007
2. ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ/29/ಉಖಾಯೋ/2006 ದಿನಾಂಕ 11-9-2007.

**ಪ್ರಸ್ತಾವನೆ:-**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ-ಕರ್ನಾಟಕ ಇದರಡಿ, ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ 2007-08 ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಉಲ್ಲೇಖ(1) ರ ಪತ್ರದಲ್ಲಿ ರೂ. 2000.00 ಲಕ್ಷಗಳನ್ನು ನೇರವಾಗಿ ಬೀದರ ಜಿಲ್ಲೆಗೆ ತನ್ನ ಪಾಲಿನ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಕೂಡಲೇ, ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. ರಾಜ್ಯದ ಪಾಲಿನ ಅನುದಾನವಾದ ಶೇಕಡ 10 ರಷ್ಟಿನ ರೂ 200.00 ಲಕ್ಷಗಳ ಮೊದಲನೇ ಕಂತಿನ ಅನುದಾನವನ್ನುಸಾಮಗ್ರಿ ಘಟಕದ ವೆಚ್ಚಕ್ಕಾಗಿ ಬೀದರ ಜಿಲ್ಲೆಗೆ ಬಿಡುಗಡೆ ಮಾಡಬೇಕಾಗಿದೆ. ಆದರೆ ಈಗ, ಪ್ರಧಾನ ಲೆಕ್ಕಶೀರ್ಷಿಕೆಯಾದ "2505-60-196-6-04" ಇದರಲ್ಲಿ ಒದಗಿಸಲಾದ ಅನುದಾನದಲ್ಲಿ ಅನುದಾನದ ಶಿಲ್ಕು ಕಡಿಮೆ

ಇರುವುದರಿಂದ, ಪೂರ್ಣ ಪ್ರಮಾಣದಲ್ಲಿ ಬಿಡುಗಡೆ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ರೂ. 188.86 ಲಕ್ಷಗಳ ಮೊದಲನೇ ಕಂತಿನ ಅನುದಾನವನ್ನು ಬೀದರ ಜಿಲ್ಲೆಗೆ ಭಾಗಶ: ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 16 ಉಖಾಯೋ 07, ಬೆಂಗಳೂರು ದಿನಾಂಕ 1ನೇ ಫೆಬ್ರವರಿ, 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರದ ಆದೇಶದನ್ವಯ 2007-08 ನೇ ಸಾಲಿನಲ್ಲಿ, ರಾಜ್ಯದ ಪಾಲಿನ ಮೊದಲನೇ ಕಂತಿನ ಅನುದಾನವಾದ ರೂ. 188.86 ಲಕ್ಷಗಳನ್ನು (ರೂ. ಒಂದು ಕೋಟಿ ಎಂಬತ್ತೆಂಟು ಲಕ್ಷಗಳು ಎಂಬತ್ತಾರು ಸಾವಿರ ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಬೀದರ ಜಿಲ್ಲೆಗೆ ಸಾಮಗ್ರಿ ಘಟಕದ ವೆಚ್ಚಕ್ಕಾಗಿ ಬಳಸಲು ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ.7.ಜೆಡ್‌ಪಿಎ.2003 ದಿನಾಂಕ 14-7-2005 ಮತ್ತು ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ-1/ಜಡ್‌ಪಿಎ 2007(ಪಿ-2) ದಿನಾಂಕ 26-4-2007 ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ-1ಕ್ಕೆ ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು ಹಾಗೂ ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಈ ಅನುದಾನದ ವೆಚ್ಚವನ್ನು ಭರಿಸತಕ್ಕದ್ದು,

1. ಜಿಲ್ಲಾ ಪಂಚಾಯತಿ 2505 ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ (2505-60-196-6-04) 2007-08 (ಯೋಜನೆ).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1-2-2007 ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ - ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/ 18/ಪಿಬಿಎಸ್/2008 ದಿನಾಂಕ 29-01-2008 ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ಕೃಷ್ಣಯ್ಯ,**
ನಿರ್ದೇಶಕರು ,
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**Annexure to G.O.No. RDP/16/NRE/2007 Bangalore Dated: 01-02-2008**

**Statement showing the release of balance of State Share of partial I Instalment of funds under SGRY Head of Account during 2007-2008 for utilization to the programmes of NREGA**

(Rs. in lakhs)

| Sl. No | District | Object Code | Central releases dated 26-11-2007 | State share proposed for releases as per Col.No. 4 | Funds being released in this order under H/A (2505-60-196-6-04) | Funds to be released later on (5-6) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Bidar | 419 | 2000.00 | 200.00 | 188.860 | 11.140 |

**B.N. KRISHNAIAH**
Director (SEP)
E/o Additional Secretary to Government
Rural Development & Pan.Raj Dept.,

ಪಿ.ಆರ್. 320

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಸ್.ಎನ್. ನಾಗರಾಜ್ ಕೆ.ಎ.ಎಸ್. (ಆ.ಶ್ರೇ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ– ಅರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂ ಸಿಆಸುಇ 143 ಎಸ್‌ಇಎನ್ 06, ದಿನಾಂಕ 2–2–07.

2) ಶ್ರೀ ಎಸ್.ಎನ್. ನಾಗರಾಜ್ ಕೆ.ಎ.ಎಸ್. ಅಧಿಕಾರಿ ರವರ ಲಿಖಿತ ಹೇಳಿಕೆ ದಿನಾಂಕ 23–2–2007.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 143 ಎಸ್‌ಇಎನ್ 06, ದಿನಾಂಕ 11–6–2007.

4) ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕ 24–10–2007.

**ಪ್ರಸ್ತಾವನೆ:**

ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಆ.ಶ್ರೇ) ಅಧಿಕಾರಿ ಇವರು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ದಿನಾಂಕ 22–4–06ರಂದು ಜಿಲ್ಲಾ ಪರಿಷತ್ ಮಾಜಿ ಅಧ್ಯಕ್ಷರು ಮೈಸೂರು ಸಿಟಿಯ ಡಾ: ರಾಜ್‌ಕುಮಾರ್ ರಸ್ತೆ ಕಾಮಗಾರಿಯು ಸ್ಥಗಿತಗೊಂಡಿರುವ ಬಗ್ಗೆ ಚರ್ಚಿಸಲು ಹೋದಾಗ ಸರ್ಕಾರದ ಬಗ್ಗೆ ಅನುಚಿತವಾಗಿ ಮಾತನಾಡಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿದ ಆರೋಪ, ಶಾಂತವೇರಿ ಗೋಪಾಲಗೌಡ ಬಡಾವಣೆಗೆ ಮೂಲಭೂತ ಸೌಕರ್ಯ ಒದಗಿಸುವ ಸಂಬಂಧ ಎಸ್.ಆರ್. ದರಕ್ಕಿಂತ ಶೇ. 18.50 ಹೆಚ್ಚುವರಿಯಾಗಿ ಗುತ್ತಿಗೆ ನೀಡಿ ಪ್ರಾಧಿಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಆರೋಪ, ಲಾಲ್‌ಬಹದ್ದೂರ್ ಶಾಸ್ತ್ರಿ ನಗರ ಬಡಾವಣೆಗೆ ಮೂಲಭೂತ ಸೌಕರ್ಯ ಒದಗಿಸುವ ಸಂಬಂಧ ಎಸ್.ಆರ್. ದರಕ್ಕಿಂತ ಶೇ. 18.50 ಹೆಚ್ಚುವರಿಯಾಗಿ ಗುತ್ತಿಗೆ ನೀಡಿ ಪ್ರಾಧಿಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಆರೋಪ ಹಾಗೂ ಗಂಗೋತ್ರಿ ಬಡಾವಣೆಯ ಯೂತ್ ಹಾಸ್ಟೆಲಿಗೆ ಹೊಂದಿಕೊಂಡಿರುವ ಜಾಗವನ್ನು ಆಂಜನೇಯ ಟ್ರಸ್ಟ್ ಅವರಿಗೆ ರೂ. 20,16,445/– ವಾರ್ಷಿಕ ಗುತ್ತಿಗೆಗೆ ನೀಡಬೇಕಾಗಿದ್ದರೂ ಅದಕ್ಕೆ ರೂ. 10,42,445/– ವಾರ್ಷಿಕ ದರ ನಿಗಧಿಪಡಿಸಿ ಪ್ರಾಧಿಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪಗಳ ಕುರಿತು ಮೇಲೆ ಓದಲಾದ ಕ್ರಮ ಸಂ. (1)ರಲ್ಲಿ ಸದರಿ ಅಧಿಕಾರಿಗೆ ಸಿಸಿಎ ನಿಯಮಾವಳಿಗಳ ನಿಯಮ (11)ರಡಿ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಅದರಂತೆ ಮೇಲೆ ಓದಲಾದ ಕ್ರಮ ಸಂ. (2)ರಲ್ಲಿ ಆಪಾದಿತ ಅಧಿಕಾರಿಯು ನೋಟೀಸ್‌ಗೆ ಲಿಖಿತ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದರು. ಆದುದರಿಂದ ಸದರಿಯವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂ. (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ. (4)ರಲ್ಲಿ ಸರ್ಕಾರಕ್ಕೆ ವರದಿಯನ್ನು ನೀಡಿ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳು ಈ ಕೆಳಕಂಡ ಕಾರಣಗಳಿಂದಾಗಿ ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

1. ಆಪಾದಿತ ಅಧಿಕಾರಿಯು ಜಿಲ್ಲಾ ಪಂಚಾಯತ್‌ನ ಮಾಜಿ ಅಧ್ಯಕ್ಷರೊಂದಿಗೆ ಅನುಚಿತವಾಗಿ ಮಾತನಾಡಿದ ಆರೋಪಕ್ಕೆ ಸಂಬಂಧಿಸಿದಂತೆ ಆಪಾದನೆ ಮಾಡಿರುವ ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರು ಮತ್ತು ಸಾಕ್ಷಿಗಳು ಸಕಾರಣಗಳಿಲ್ಲದೆ ವಿಚಾರಣೆಗೆ ಗೈರು ಹಾಜರಾದ ಕಾರಣ ಆಪಾದಿತರ 1ನೇ ಆರೋಪ ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ.

2. ಶಾಂತವೇರಿ ಗೋಪಾಲಗೌಡ ಬಡಾವಣೆ ಮತ್ತು ಲಾಲ್‌ಬಹದೂರ್ ಶಾಸ್ತ್ರಿ ನಗರ ಬಡಾವಣೆ ಮೂಲಭೂತ ಸೌಲಭ್ಯ ಒದಗಿಸುವ ಸಂಬಂಧ ಎಸ್.ಆರ್. ದರಕ್ಕಿಂತ ಶೇ. 18.50 ರಷ್ಟು ಹೆಚ್ಚುವರಿಯಾಗಿ ಗುತ್ತಿಗೆ ನೀಡಿ ಪ್ರಾಧಿಕಾರಕ್ಕೆ ನಷ್ಟ ಉಂಟು ಮಾಡಿರುವ ಆರೋಪ ಸಂಬಂಧ, ಗುತ್ತಿಗೆದಾರರು ನಿಗದಿಪಡಿಸಿದ ಟೆಂಡರ್ ದರಕ್ಕಿಂತ ಶೇ. 25.03ರಷ್ಟು ಎಸ್.ಆರ್. ದರವನ್ನು ನಮೂದಿಸಿದ್ದು ಹಾಗೂ ಈ ದರವು ಸ್ವೀಕೃತಗೊಂಡಿರುವ ಟೆಂಡರ್‌ಗಳ ಪೈಕಿ ಅತಿ ಕಡಿಮೆ ದರ ಆಗಿರುವುದರಿಂದ ಗುತ್ತಿಗೆ ದರವನ್ನು ನಿಗದಿಪಡಿಸುವ ಅಧಿಕಾರವನ್ನು ಆಪಾದಿತ ಅಧಿಕಾರಿ ಹಾಗೂ ಇತರೆ ಸದಸ್ಯರನ್ನೊಳಗೊಂಡ ಸಮಿತಿಗೆ ನೀಡಲಾಗಿದ್ದು. ಅದರಂತೆ ಗುತ್ತಿಗೆ ದರವನ್ನು ಅಂಗೀಕರಿಸಲು ಪ್ರಾಧಿಕಾರದ ಸಂಧಾನ ಸಮಿತಿಯು ತೀರ್ಮಾನವನ್ನು ಕೈಗೊಂಡಿದ್ದು, ಈ ಪ್ರಕರಣದಲ್ಲಿ ಆಪಾದಿತ ಅಧಿಕಾರಿಯು ಸಂಧಾನ ಸಮಿತಿಯ ಅಧ್ಯಕ್ಷರಾಗಿದ್ದರೂ ಸಹ ಅವರು ದುರುದ್ದೇಶ ಉಳ್ಳವರಾಗಿ, ಲಾಭಕೋಸ್ಕರ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿದ್ದಾರೆಂಬ ಆಪಾದನೆ ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ.

3. ಹಾಗೂ ಆಪಾದಿತ ಅಧಿಕಾರಿಯು ಪ್ರಕರಣವನ್ನು ಅಧಿಕಾರೇತರ ಸದಸ್ಯರನ್ನೊಳಗೊಂಡ ಸಂಧಾನ ಸಭೆಯ ಮುಂದೆ ಮಂಡಿಸಿ ಅವರ ಅನುಮೋದನೆ ಪಡೆದು ಮುಕ್ತ ಹಾಗೂ ಪಾರದರ್ಶಕ ಸಂಧಾನ ಸಭೆಯನ್ನು ನಡೆಸಿರುತ್ತಾರೆ. ಹಾಗೂ ನಿಗದಿಪಡಿಸಿದ ಟೆಂಡರ್ ದರಕ್ಕಿಂತ ಹೆಚ್ಚುವರಿಯಾಗಿ ನಮೂದಿಸಿರುವ ದರವನ್ನು ಅಂಗೀಕರಿಸುವ ಬಗ್ಗೆ ನಡೆದ ಸಂಧಾನ ಸಭೆಯ ತೀರ್ಮಾನವನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಸಾಮಾನ್ಯ ಸಭೆಯಲ್ಲಿ ಸ್ಥಿರೀಕರಿಸಿರುವುದು ದಾಖಲೆಗಳಿಂದ ಕಂಡುಬರುವುದರಿಂದ ಆಪಾದಿತ ನೌಕರರ ಮೇಲಿನ ಈ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ.

4. ಶ್ರೀ ಆಂಜನೇಯಸ್ವಾಮಿ ದೇವಸ್ಥಾನ ಟ್ರಸ್ಟ್, ಗಂಗೋತ್ರಿ ಬಡಾವಣೆ, ಮೈಸೂರು ಇವರಿಗೆ ಆಪಾದಿತ ಅಧಿಕಾರಿಯು ಕಡಿಮೆ ದರ ನಿಗಧಿಪಡಿಸಿ ಸರ್ಕಾರದ ಅನುಮತಿ ಪಡೆಯದೇ ಚದರ ಮೀಟರ್ 1ಕ್ಕೆ ರೂ. 1770/– ಗಳಂತೆ ದರ ನಿಗದಿಪಡಿಸಿ ಗುತ್ತಿಗೆ ಆಧಾರದ ಮೇಲೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ನಿವೇಶನವನ್ನು

ನಗರಾಭಿವೃದ್ಧಿ ಪ್ರಾಧಿಕಾರದ ತೀರ್ಮಾನದಂತೆ ಗುತ್ತಿಗೆ ನೀಡಿದ್ದು ಸದರಿ ತೀರ್ಮಾನವು ಪ್ರಾಧಿಕಾರದ ತೀರ್ಮಾನವೇ ಹೊರತು ಆಯುಕ್ತರ ತೀರ್ಮಾನವಲ್ಲವೆಂದು ತಿಳಿಸುತ್ತಾ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಮೇಲ್ಕಂಡ ಆರೋಪಗಳಿಗೆ ವಿಚಾರಣಾಧಿಕಾರಿಗಳು ನೀಡಿರುವ ವರದಿಯ ಬಗ್ಗೆ ಪರಿಶೀಲಿಸಿ ಕೆಲವೊಂದು ಅಂಶಗಳಿಗೆ ಅಭಿಪ್ರಾಯ ನೀಡುವಂತೆ ನಗರಾಭಿವೃದ್ಧಿ ಇಲಾಖೆಯನ್ನು ಕೋರಲಾಗಿತ್ತು. ಅದರಂತೆ ನಗರಾಭಿವೃದ್ಧಿ ಇಲಾಖೆಯು ಈ ಬಗ್ಗೆ ಪರಿಶೀಲಿಸಿ ಸಮರ್ಥನೆ ನೀಡಿ ವಿಚಾರಣಾ ವರದಿಯನ್ನು ಒಪ್ಪಬಹುದಾಗಿದೆ ಎಂದು ತಿಳಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 143 ಎಸ್‌ಇಎನ್ 2006 (ಸಿಆಸುಇ 165 ಕೆಇವಿ 2007),**
**ಬೆಂಗಳೂರು, ದಿನಾಂಕ 13ನೇ ಮೇ, 2008**

ಪ್ರಸ್ತಾವನೆ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಎಸ್.ಎನ್. ನಾಗರಾಜ್ ಕೆ.ಎ.ಎಸ್. (ಆ.ಶ್ರೇ) ಅಧಿಕಾರಿ ಅವರನ್ನು ದಿನಾಂಕ 2–2–2007ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೆಯೇ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ಅಂದರೆ ದಿನಾಂಕ 25–4–2006 ರಿಂದ 25–7–2006ನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 1957ರ ನಿಯಮ 100(3)ರ ಪ್ರಕಾರ ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ನಾಗೇಂದ್ರ**
ಪಿ.ಆರ್. 790 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು 2).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಎಸ್‌ಜಿಎಸ್‌ವೈ ಯೋಜನೆಯಡಿ 2008-09ನೇ ಸಾಲಿಗೆ ಆರ್ಥಿಕ ಮತ್ತು ಭೌತಿಕ ಗುರಿ ಹಾಗೂ ಕ್ರಿಯಾ ಯೋಜನೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 25 ಎಸ್‌ಜೆವೈ 2008, ಬೆಂಗಳೂರು ದಿನಾಂಕ 17-04-08.
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ20011/02/2008-ಎಸ್‌ಜಿಎಸ್‌ವೈ 1: ದಿನಾಂಕ 01-04-08.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ12022/1/2008ಎಸ್‌ಜಿಎಸ್‌ವೈ1(12) ದಿನಾಂಕ 2-04-08.
4. ಕೇಂದ್ರ ಸರ್ಕಾರದ ಅ.ಸ.ಪತ್ರ ಸಂಖ್ಯೆ : 1/12011/3/2008 ಎಸ್‌ಜಿಎಸ್‌ವೈ (ಸಿ) ದಿನಾಂಕ 08-04-2008.

ಉಲ್ಲೇಖ (1) ರ ಆದೇಶದ ಮೇರೆಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯನ್ನು 2008-09 ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಕೇಂದ್ರ ಸರ್ಕಾರವು ಈ ಯೋಜನೆಯ ಅನುಷ್ಟಾನಕ್ಕಾಗಿ 2008-09 ನೇ ಸಾಲಿಗೆ ತನ್ನ ಪಾಲಿನ ಅನುದಾನ ರೂ.8016.88 ಲಕ್ಷಗಳನ್ನು ಉಲ್ಲೇಖ (2) ರಲ್ಲಿ ನಿಗದಿಪಡಿಸಿದೆ. ರಾಜ್ಯದ ಪಾಲಿನ ಅನುದಾನ ರೂ.2672.29 ಲಕ್ಷಗಳನ್ನು ಸೇರಿಸಿ ಒಟ್ಟು ರೂ.10689.17 ಲಕ್ಷ ಈ ಸಾಲಿಗೆ ಹಂಚಿಕೆಯಾಗಿರುತ್ತದೆ. ಕೇಂದ್ರ ಸರ್ಕಾರ ಈ ಯೋಜನೆಯಡಿ ಪರಿಷ್ಕರಿಸಿದ ಹೊಸ ಮಾರ್ಗಸೂಚಿಯನ್ವಯ ಅನುಷ್ಟಾನಗೊಳಿಸುವುದಕ್ಕೆ ಆರ್ಥಿಕ ಮತ್ತು ಭೌತಿಕ ಗುರಿಯನ್ನು ನಿಗದಿಪಡಿಸಬೇಕಾಗಿದೆ. ಶೇ.10 ತರಬೇತಿಗೆ, ಶೇ.10 ಸುತ್ತುನಿಧಿಗೆ ಮತ್ತು ಶೇ.20 ಮೂಲಭೂತ ಸೌಕರ್ಯಕ್ಕೆ ನಿಗದಿಪಡಿಸಬೇಕಾಗಿದೆ. ಈ ಯೋಜನೆಯ ನೆರವನ್ನು ಮಹಿಳೆಯರಿಗೆ (ಶೇ.40) ಹಾಗೂ ಗ್ರಾಮೀಣ ಭಾಗದ ಎಲ್ಲಾ ವರ್ಗಗಳಿಗೂ ದೊರಕಿಸಿಕೊಡುವ ಉದ್ದೇಶದಿಂದ ಪರಿಶಿಷ್ಟ ಜಾತಿ (ಶೇ.42) ಪರಿಶಿಷ್ಟ ಪಂಗಡ (ಶೇ.8), ಅಲ್ಪಸಂಖ್ಯಾತರು (ಶೇ.11) ಹಾಗೂ ಅಂಗವಿಕಲರುಗಳಿಗೆ (ಶೇ.3 ) ನಿಗದಿಪಡಿಸಬೇಕಾಗಿದೆ.

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ 2008-09 ನೇ ಸಾಲಿನಲ್ಲಿ ಫಲಾನುಭವಿಗಳಿಗೆ ಅಗತ್ಯ ಸಾಲ ನೀಡಿಕೆಗಾಗಿ ರಾಜ್ಯಕ್ಕೆ ರೂ.15,578.19 ಲಕ್ಷಗಳ ಗುರಿ ನಿಗದಿಪಡಿಸಿ ಕೇಂದ್ರ ಸರ್ಕಾರವು ಉಲ್ಲೇಖ (4) ರ ಮೂಲಕ ತಿಳಿಸಿದೆ. ಇದನ್ನು ಜಿಲ್ಲಾವಾರು ವಿಂಗಡಿಸಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2008-09 ನೇ ಸಾಲಿಗೆ ಸಾಲ ನೀಡಿಕೆ ಗುರಿಯಾಗಿ ನಿಗದಿಪಡಿಸಬೇಕಾಗಿದೆ.

ಎಸ್‌ಜಿಎಸ್‌ವೈ ಅಡಿ ಕೇಂದ್ರವು ತನ್ನ ಪಾಲಿನ ಅನುದಾನದ ಮೊದಲನೆಯ ಕಂತಿನ ಹಣವನ್ನು ನೇರವಾಗಿ ಜಿಲ್ಲೆಗಳಿಗೆ ಉಲ್ಲೇಖ (3) ರಲ್ಲಿ ಬಿಡುಗಡೆ ಮಾಡಿದೆ. ಕೆಲವು ಜಿಲ್ಲೆಗಳಲ್ಲಿ 2008-09 ನೇ ಸಾಲಿಗೆ ಯೋಜನೆಯಡಿ ಆರಂಭಿಕ ಶಿಲ್ಕು ಲಭ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ 2008-09 ನೇ ಸಾಲಿಗೆ ಕ್ರಿಯಾ ಯೋಜನೆಯನ್ನು ತಯಾರಿಸಿ ಜಿಲ್ಲೆಗಳಿಗೆ ತಿಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 30 ಎಸ್‌ಜೆವೈ 2008, ಬೆಂಗಳೂರು, ದಿನಾಂಕ 29ನೇ ಏಪ್ರಿಲ್, 2008**

ಎಸ್‌ಜಿಎಸ್‌ವೈ ಯಡಿ 2008-09 ನೇ ಸಾಲಿಗೆ ಜಿಲ್ಲಾವಾರು ನಿಗದಿಪಡಿಸಿದ ಆರ್ಥಿಕ ಮತ್ತು ಭೌತಿಕ ಗುರಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧ 1, 2, 3 ಮತ್ತು 3ಎ ರಲ್ಲಿ ಹಾಗೂ ಅನುಬಂಧ 4 ರಲ್ಲಿ ಕ್ಲಸ್ಟರ್, ಅನುಬಂಧ 5 ರಲ್ಲಿ ಜಿಲ್ಲೆಯಲ್ಲಿ ತೆಗೆದುಕೊಳ್ಳಬಹುದಾದ ವಿವಿಧ ಚಟುವಟಿಕೆಗಳಿಗೆ ಗುರಿ ನಿಗದಿ ಅನುಬಂಧ-6 ರಲ್ಲಿ ಈ ಯೋಜನೆಯಲ್ಲಿ ತರಬೇತಿ ನೀಡಲು ತರಬೇತಿ ಕೇಂದ್ರಗಳನ್ನು ಗುರುತಿಸಿದೆ. 2008-09 ನೇ ಸಾಲಿಗೆ ಮಾಹೆವಾರು ಮಾಡಬೇಕಾದ ಕ್ಯಾಲೆಂಡರ್ ಆಫ್ ಈವೆಂಟ್ಸ್ ಕೂಡಾ ಲಗತ್ತಿಸಿದೆ. ಇದರಂತೆ ಎಲ್ಲಾ ಜಿಲ್ಲಾ ಪಂಚಾಯತಿಗಳು ಕ್ರಮ ವಹಿಸುವುದು.

ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಈ ಕೆಳಕಂಡ ಅಂಶಗಳಿಗೆ ಹೆಚ್ಚಿನ ಆದ್ಯತೆ ನೀಡುವುದು.

- ಯೋಜನೆಯಡಿ ಆರ್ಥಿಕ, ಭೌತಿಕ, ಸಾಲ ನೀಡಿಕೆ (ಕ್ರೆಡಿಟ್ ಮೊಬಿಲೈಸೇಷನ್) ಮತ್ತು ವರ್ಗಾವಾರು ಗುರಿಯನ್ನು ನಿಗದಿಪಡಿಸಿರುವಂತೆ ( ಅನುಬಂಧ 1, 2, 3 ಮತ್ತು 4) ಜಿಲ್ಲೆಗಳು ಪ್ರಗತಿಯನ್ನು ಸಾಧಿಸತಕ್ಕದ್ದು.
- ಸದರಿ ವರ್ಷದಲ್ಲಿ ಸಹಾಯಧನವನ್ನು ಗುಂಪು ಫಲಾನುಭವಿಗಳಿಗೆ ಮಾತ್ರ ನೀಡುವುದು. ಆದರೆ ವೈಯಕ್ತಿಕ ಅಂಗವಿಕಲರಿದ್ದಲ್ಲಿ ಅವರಿಗೆ ಸಹಾಯಧನವನ್ನು ವೈಯಕ್ತಿಕವಾಗಿ ನೀಡಬಹುದು.
- ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಪರಿಶಿಷ್ಟ ಜಾತಿ (ಶೇ.42), ಪರಿಶಿಷ್ಟ ಪಂಗಡ (ಶೇ.8), ಮಹಿಳೆಯರು (ಶೇ.40), ಅಲ್ಪಸಂಖ್ಯಾತರು (ಶೇ.11) ಹಾಗೂ ಅಂಗವಿಕಲರಿಗೆ (ಶೇ.3 - ಗುಂಪಿಗೆ ಶೇ.2/ವೈಯಕ್ತಿಕ ಶೇ.1) ನೀಡಬೇಕಾದ ಶೇಕಡಾವಾರು ಸೌಲಭ್ಯವನ್ನು ಗಮನದಲ್ಲಿಟ್ಟುಕೊಂಡು ಕ್ರಿಯಾ ಯೋಜನೆ ತಯಾರಿಸಿ ಸರ್ಕಾರದ ಗಮನಕ್ಕೆ ತಂದು ಅನುಷ್ಠಾನಗೊಳಿಸತಕ್ಕದ್ದು.
- ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಎಸ್‌ಜಿಎಸ್‌ವೈ ಸಭೆಯನ್ನು ಮಾರ್ಗಸೂಚಿಯನ್ವಯ ನಿಯತವಾಗಿ ಮಾಡುವುದು.
- ಸರ್ಕಾರದ ಸುತ್ತೋಲೆ ಸಂಖ್ಯೆ ಗ್ರಾಅಪ 30 ಎಸ್‌ಜೆವೈ 2007 ದಿನಾಂಕ 29-02-2008 ರಲ್ಲಿ ಸೂಚಿಸಿರುವಂತೆ 2008-09 ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಮಂಡ್ಯ, ಚಿತ್ರದುರ್ಗ, ಗುಲ್ಬರ್ಗಾ, ಬೀದರ್, ಕೊಪ್ಪಳ, ಬಿಜಾಪುರ, ರಾಯಚೂರು, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ರಾಮನಗರ, ಚಿಕ್ಕಬಳ್ಳಾಪುರ ಮತ್ತು ಗದಗ್ ಜಿಲ್ಲೆಯಲ್ಲಿ ಹೈನುಗಾರಿಕೆ ಚಟುವಟಿಕೆಯನ್ನು ನಿಷೇಧಿಸಲಾಗಿದೆ. ಉಳಿದ ಜಿಲ್ಲೆಗಳಾದ ಬಾಗಲಕೋಟೆ, ಬೆಳಗಾಂ, ಬಳ್ಳಾರಿ, ದಾವಣಗೆರೆ, ದಕ್ಷಿಣ ಕನ್ನಡ, ಧಾರವಾಡ, ಹಾಸನ, ಹಾವೇರಿ, ಕೋಲಾರ, ಮೈಸೂರು, ತುಮಕೂರು ಮತ್ತು ಉಡುಪಿ ಜಿಲ್ಲೆಗಳಲ್ಲಿ ಹೈನುಗಾರಿಕೆ ಚಟುವಟಿಕೆಗೆ ಸಹಾಯಧನದ ಹಂಚಿಕೆಯ ಶೇ.10 ರಷ್ಟು ಮಾತ್ರ ತೆಗೆದು ಕೊಳ್ಳಬಹುದು.
- ಆಯಾ ಅಂಶಗಳಿಗೆ ನಿಗದಿ ಪಡಿಸಿದ ಅನುದಾನವನ್ನು ಕಡ್ಡಾಯವಾಗಿ ಆಯಾ ಅಂಶಗಳಿಗೆ ನೀಡಿ ಅನುಷ್ಠಾನ ಗೊಳಿಸುವುದು.
- ಒಂದು ಜಿಲ್ಲೆಯಿಂದ 4-5 ಕಸ್ಟರ್ ಪದ್ಧತಿಯನ್ನು ಅಭಿವೃದ್ಧಿ ಪಡಿಸಿ ಅನುಷ್ಠಾನಗೊಳಿಸುವುದು.
- ಕೇಂದ್ರ ಸರ್ಕಾರಕ್ಕೆ ಎರಡನೇ ಕಂತಿನ ಹಣ ಬಿಡುಗಡೆಗೆ ಪ್ರಸ್ತಾವನೆ ಕಳುಹಿಸುವ ಮುನ್ನ ಪ್ರಸಕ್ತ ಸಾಲಿನಲ್ಲಿ ಈ ಯೋಜನೆಯಡಿ ಜಿಲ್ಲೆಗಳಲ್ಲಿ ಲಭ್ಯವಿರುವ ಹಣದ ಶೇ 60 ರಷ್ಟು ವೆಚ್ಚ ಮಾಡಿರಬೇಕು.
- 2007-2008 ನೇ ಸಾಲಿನ ಆಡಿಟ್ ವರದಿಯನ್ನು ಜುಲೈ ತಿಂಗಳಲ್ಲಿ ಕಳುಹಿಸುವುದು.
- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಮಾಸಿಕ ಪ್ರಗತಿಯನ್ನು ನಿಗದಿತ ನಮೂನೆಗಳಲ್ಲಿ (1 ರಿಂದ 8 ಎ ವರೆಗೆ) ಪ್ರತಿ ಮಾಹೆ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ ಆನ್‌ಲೈನ್ ಗೆ ಅಪ್‌ಲೋಡ್ ಮಾಡಿ ಪ್ರತಿಯನ್ನು ಸ್ವಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಲುಪುವಂತೆ ಕಳುಹಿಸಲು ಕೋರಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ಶ್ರೀಕಾಂತ್**

ಸರ್ಕಾರದ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಅನುಬಂಧ - 1

### ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ 2008-09 ನೇ ಸಾಲಿಗೆ ನಿಗದಿಗೊಳಿಸಿರುವ ಆರ್ಥಿಕ ಮತ್ತು ಭೌತಿಕ ಗುರಿ

ರೂ. ಲಕ್ಷಗಳಲ್ಲಿ

| ಕ್ರ ಸಂ | ಜಿಲ್ಲಾ ಪಂಚಾಯತಿಯ ಹೆಸರು | 2008-09 ನೇ ಸಾಲಿಗೆ ನಿಗದಿತ ಅನುದಾನ | ಮೂಲ ಭೂತ ಸೌಕರ್ಯ ಅಭಿವೃದ್ಧಿ ಗಾಗಿ | ತರ ಬೇತಿ ಗಾಗಿ | ಸುತ್ತು ನಿಧಿ | ಸಹಾಯಧನ ನೀಡಿಕೆಗಾಗಿ | | | ಸಾಲ ನೀಡಿಕೆ (ಕ್ರೆಡಿಟ್ ಮೊಬಿಲೈಜೇಷನ್) | | | ಸ್ವರೋಜ್‌ಗಾರಿಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|
| | | | | | | ಒಟ್ಟು | ಗುಂಪು ಸ್ವರೋಜ್ ಗಾರಿಗಳಿಗೆ | ವೈಯಕ್ತಿಕ ಅಂಗವಿಕಲ ಸ್ವರೋಜ್ ಗಾರಿಗಳಿಗೆ | ಒಟ್ಟು | ಗುಂಪು ಗಳಿಗೆ | ವೈಯಕ್ತಿಕ ಅಂಗ ವಿಕಲ ಸ್ವರೋಜ್ ಗಾರಿಗಳಿಗೆ | ಒಟ್ಟು ಸ್ವರೋಜ್ ಗಾರಿಗಳು | ಗುಂಪು ಗಳು | ಗುಂಪು ಸ್ವರೋಜ್ ಗಾರಿಗಳು | ವೈಯ ಕ್ತಿಕ ಸ್ವ ರೋಜ್ ಗಾರಿ ಗಳು * |
| 1 | ಬಾಗಲಕೋಟೆ | 252.28 | 50.46 | 25.23 | 25.23 | 151.37 | 149.85 | 1.51 | 367.67 | 364.00 | 3.68 | 1800 | 150 | 1798 | 2 |
| 2 | ಬೆಂಗಳೂರು ಗ್ರಾ | 194.24 | 38.85 | 19.42 | 19.42 | 116.54 | 115.38 | 1.17 | 283.09 | 280.25 | 2.83 | 1386 | 115 | 1385 | 1 |
| 3 | ಬೆಂಗಳೂರು ನಗರ | 107.40 | 21.48 | 10.74 | 10.74 | 64.44 | 63.80 | 0.64 | 156.52 | 154.96 | 1.57 | 766 | 64 | 766 | 1 |
| 4 | ಬೆಳಗಾಂ | 745.72 | 149.14 | 74.57 | 74.57 | 447.43 | 442.96 | 4.47 | 1086.81 | 1075.94 | 10.87 | 5320 | 443 | 5315 | 4 |
| 5 | ಬಳ್ಳಾರಿ | 592.51 | 118.50 | 59.25 | 59.25 | 355.50 | 351.95 | 3.56 | 863.52 | 854.88 | 8.64 | 4227 | 352 | 4223 | 4 |
| 6 | ಬೀದರ್ | 419.92 | 83.98 | 41.99 | 41.99 | 251.95 | 249.43 | 2.52 | 611.99 | 605.87 | 6.12 | 2996 | 249 | 2993 | 3 |
| 7 | ಬಿಜಾಪುರ | 494.32 | 98.86 | 49.43 | 49.43 | 296.59 | 293.63 | 2.97 | 720.42 | 713.22 | 7.20 | 3526 | 294 | 3524 | 3 |
| 8 | ಚಾಮರಾಜನಗರ | 523.23 | 104.65 | 52.32 | 52.32 | 313.94 | 310.80 | 3.14 | 762.55 | 754.93 | 7.63 | 3733 | 311 | 3730 | 3 |
| 9 | ಚಿಕ್ಕಮಗಳೂರು | 237.59 | 47.52 | 23.76 | 23.76 | 142.55 | 141.13 | 1.43 | 346.26 | 342.80 | 3.46 | 1695 | 141 | 1694 | 1 |
| 10 | ಚಿಕ್ಕಬಳ್ಳಾಪುರ | 292.65 | 58.53 | 29.27 | 29.27 | 175.59 | 173.84 | 1.76 | 426.51 | 422.25 | 4.27 | 2088 | 174 | 2086 | 2 |
| 11 | ಚಿತ್ರದುರ್ಗ | 422.04 | 84.41 | 42.20 | 42.20 | 253.22 | 250.69 | 2.53 | 615.08 | 608.93 | 6.15 | 3011 | 251 | 3008 | 3 |
| 12 | ದಕ್ಷಿಣ ಕನ್ನಡ | 229.41 | 45.88 | 22.94 | 22.94 | 137.65 | 136.27 | 1.38 | 334.35 | 331.00 | 3.34 | 1637 | 136 | 1635 | 1 |
| 13 | ದಾವಣಗೆರೆ | 340.65 | 68.13 | 34.07 | 34.07 | 204.39 | 202.35 | 2.04 | 496.47 | 491.50 | 4.96 | 2430 | 202 | 2428 | 2 |
| 14 | ಧಾರವಾಡ | 212.51 | 42.50 | 21.25 | 21.25 | 127.50 | 126.23 | 1.28 | 309.71 | 306.61 | 3.10 | 1516 | 126 | 1515 | 1 |
| 15 | ಗದಗ್ | 337.29 | 67.46 | 33.73 | 33.73 | 202.38 | 200.35 | 2.02 | 491.57 | 486.66 | 4.92 | 2406 | 200 | 2404 | 2 |
| 16 | ಗುಲ್ಬರ್ಗಾ | 614.29 | 122.86 | 61.43 | 61.43 | 368.58 | 364.89 | 3.69 | 895.27 | 886.32 | 8.95 | 4382 | 365 | 4379 | 4 |
| 17 | ಹಾಸನ | 307.91 | 61.58 | 30.79 | 30.79 | 184.74 | 182.90 | 1.85 | 448.74 | 444.26 | 4.49 | 2197 | 183 | 2195 | 2 |

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| 18 | ಹಾವೇರಿ | 368.33 | 73.67 | 36.83 | 36.83 | 221.00 | 218.79 | 2.21 | 536.81 | 531.44 | 5.37 | 2628 | 219 | 2625 | 2 |
| 19 | ಕೊಡಗು | 86.55 | 17.31 | 8.65 | 8.65 | 51.93 | 51.41 | 0.52 | 126.13 | 124.87 | 1.26 | 617 | 51 | 617 | 1 |
| 20 | ಕೋಲಾರ | 292.67 | 58.53 | 29.27 | 29.27 | 175.60 | 173.84 | 1.76 | 426.53 | 422.27 | 4.27 | 2088 | 174 | 2086 | 2 |
| 21 | ಕೊಪ್ಪಳ | 529.93 | 105.99 | 52.99 | 52.99 | 317.96 | 314.78 | 3.18 | 772.32 | 764.60 | 7.72 | 3781 | 315 | 3777 | 3 |
| 22 | ಮಂಡ್ಯ | 400.83 | 80.17 | 40.08 | 40.08 | 240.50 | 238.09 | 2.40 | 584.16 | 578.32 | 5.84 | 2859 | 238 | 2857 | 2 |
| 23 | ಮೈಸೂರು | 488.52 | 97.70 | 48.85 | 48.85 | 293.11 | 290.18 | 2.93 | 711.97 | 704.85 | 7.12 | 3485 | 290 | 3482 | 3 |
| 24 | ರಾಯಚೂರು | 499.04 | 99.81 | 49.90 | 49.90 | 299.42 | 296.43 | 2.99 | 727.30 | 720.03 | 7.27 | 3560 | 296 | 3557 | 3 |
| 25 | ರಾಮನಗರ | 194.23 | 38.85 | 19.42 | 19.42 | 116.54 | 115.37 | 1.17 | 283.07 | 280.24 | 2.83 | 1386 | 115 | 1384 | 1 |
| 26 | ಶಿವಮೊಗ್ಗ | 424.49 | 84.90 | 42.45 | 42.45 | 254.70 | 252.15 | 2.55 | 618.66 | 612.47 | 6.19 | 3028 | 252 | 3026 | 3 |
| 27 | ತುಮಕೂರು | 629.23 | 125.85 | 62.92 | 62.92 | 377.54 | 373.76 | 3.78 | 917.03 | 907.86 | 9.17 | 4489 | 374 | 4485 | 4 |
| 28 | ಉಡುಪಿ | 186.76 | 37.35 | 18.68 | 18.68 | 112.06 | 110.94 | 1.12 | 272.18 | 269.46 | 2.72 | 1332 | 111 | 1331 | 1 |
| 29 | ಉತ್ತರ ಕನ್ನಡ | 264.64 | 52.93 | 26.46 | 26.46 | 158.78 | 157.20 | 1.59 | 385.69 | 381.83 | 3.86 | 1888 | 157 | 1886 | 2 |
| | | 10689.17 | 2137.83 | 1068.92 | 1068.92 | 6413.50 | 6349.37 | 64.14 | 15578.40 | 15422.62 | 155.78 | 76257 | 6349 | 76192 | 64 |

** 2006-2007 ರ ಮಾರ್ಚ್ ತಿಂಗಳ ಪ್ರಗತಿ ವರದಿ ಮೇರೆಗೆ ( ಪರಿಶೋಧಿಸಲ್ಪಡದ ಲೆಕ್ಕ)

* ಜಿಲ್ಲೆಗಳು ಗುಂಪು ಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡುವುದು. ವೈಯಕ್ತಿಕ - ಅಂಗವಿಕಲ ಸ್ವರೋಜ್‌ಗಾರಿಗಳಿಗೆ ಮಾತ್ರ. ಪ್ರತಿ ಗುಂಪಿಗೆ ಸರಾಸರಿ 12 ಸ್ವರೂಜ್‌ಗಾರಿಗಳೆಂದು ಅಂದಾಜಿಸಲಾಗಿದೆ.

ಪ್ರತಿ ಗುಂಪಿಗೆ 12 ಸ್ವರೋಜ್‌ಗಾರಿಗಳೆಂದು ಅಂದಾಜಿಸಲಾಗಿದೆ.

## ಅನುಬಂಧ - 2

### ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ 2008-09 ನೇ ಸಾಲಿಗೆ ನಿಗದಿಗೊಳಿಸಿರುವ ಆರ್ಥಿಕ ಮತ್ತು ಭೌತಿಕ ಗುರಿ

ರೂ. ಲಕ್ಷಗಳಲ್ಲಿ

| ಕ್ರ ಸಂ | ಜಿಲ್ಲಾ ಪಂಚಾಯತಿಯ ಹೆಸರು | 2008-09 ನಿಗದಿತ ಅನುದಾನ | | | ವರ್ಗಾವಾರು ನಿಗದಿತ ಅನುದಾನ (ಸಹಾಯಧನ) | | | | | | | | |
|---|---|---|---|---|---|---|---|---|---|---|---|---|---|
| | | ಒಟ್ಟು | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | ಪ.ಜಾತಿ | ಪ.ವರ್ಗ | ಅಲ್ಪ ಸಂಖ್ಯಾತರು | ಇತರರು | ಮಹಿಳೆಯರು | ಅಂಗವಿಕಲರು | | |
| | | | | | | | | | | | ಗುಂಪು | ವೈಯಕ್ತಿಕ | ಒಟ್ಟು |
| 1 | ಬಾಗಲಕೋಟೆ | 252.28 | 189.21 | 63.07 | 151.37 | 63.57 | 12.11 | 16.65 | 54.49 | 60.55 | 3.03 | 1.51 | 4.54 |
| 2 | ಬೆಂಗಳೂರು ಗ್ರಾ | 194.24 | 145.68 | 48.56 | 116.54 | 48.95 | 9.32 | 12.82 | 41.96 | 46.62 | 2.33 | 1.17 | 3.50 |
| 3 | ಬೆಂಗಳೂರು ನಗರ | 107.40 | 80.55 | 26.85 | 64.44 | 27.06 | 5.16 | 7.09 | 23.20 | 25.78 | 1.29 | 0.64 | 1.93 |

| | | | | | | | | | | | | | |
|---|---|---|---|---|---|---|---|---|---|---|---|---|---|
| 4 | ಬೆಳಗಾಂ | 745.72 | 559.29 | 186.43 | 447.43 | 187.92 | 35.79 | 49.22 | 161.08 | 178.97 | 8.95 | 4.47 | 13.42 |
| 5 | ಬಳ್ಳಾರಿ | 592.51 | 444.38 | 148.13 | 355.50 | 149.31 | 28.44 | 39.11 | 127.98 | 142.20 | 7.11 | 3.56 | 10.67 |
| 6 | ಬೀದರ್ | 419.92 | 314.94 | 104.98 | 251.95 | 105.82 | 20.16 | 27.71 | 90.70 | 100.78 | 5.04 | 2.52 | 7.56 |
| 7 | ಬಿಜಾಪುರ | 494.32 | 370.74 | 123.58 | 296.59 | 124.57 | 23.73 | 32.63 | 106.77 | 118.64 | 5.93 | 2.97 | 8.90 |
| 8 | ಚಾಮರಾಜನಗರ | 523.23 | 392.42 | 130.81 | 313.94 | 131.85 | 25.11 | 34.53 | 113.02 | 125.57 | 6.28 | 3.14 | 9.42 |
| 9 | ಚಿಕ್ಕಮಗಳೂರು | 237.59 | 178.19 | 59.40 | 142.55 | 59.87 | 11.40 | 15.68 | 51.32 | 57.02 | 2.85 | 1.43 | 4.28 |
| 10 | ಚಿಕ್ಕಬಳ್ಳಾಪುರ | 292.65 | 219.49 | 73.16 | 175.59 | 73.75 | 14.05 | 19.32 | 63.21 | 70.24 | 3.51 | 1.76 | 5.27 |
| 11 | ಚಿತ್ರದುರ್ಗ | 422.04 | 316.53 | 105.51 | 253.22 | 106.35 | 20.26 | 27.85 | 91.16 | 101.29 | 5.06 | 2.53 | 7.60 |
| 12 | ದಕ್ಷಿಣ ಕನ್ನಡ | 229.41 | 172.06 | 57.35 | 137.65 | 57.81 | 11.01 | 15.14 | 49.55 | 55.06 | 2.75 | 1.38 | 4.13 |
| 13 | ದಾವಣಗೆರೆ | 340.65 | 255.49 | 85.16 | 204.39 | 85.84 | 16.35 | 22.48 | 73.58 | 81.76 | 4.09 | 2.04 | 6.13 |
| 14 | ಧಾರವಾಡ | 212.51 | 159.38 | 53.13 | 127.50 | 53.55 | 10.20 | 14.03 | 45.90 | 51.00 | 2.55 | 1.28 | 3.83 |
| 15 | ಗದಗ್ | 337.29 | 252.97 | 84.32 | 202.38 | 85.00 | 16.19 | 22.26 | 72.86 | 80.95 | 4.05 | 2.02 | 6.07 |
| 16 | ಗುಲ್ಬರ್ಗಾ | 614.29 | 460.72 | 153.57 | 368.58 | 154.80 | 29.49 | 40.54 | 132.69 | 147.43 | 7.37 | 3.69 | 11.06 |
| 17 | ಹಾಸನ | 307.91 | 230.93 | 76.98 | 184.74 | 77.59 | 14.78 | 20.32 | 66.51 | 73.90 | 3.69 | 1.85 | 5.54 |
| 18 | ಹಾವೇರಿ | 368.33 | 276.25 | 92.08 | 221.00 | 92.82 | 17.68 | 24.31 | 79.56 | 88.40 | 4.42 | 2.21 | 6.63 |
| 19 | ಕೊಡಗು | 86.55 | 64.91 | 21.64 | 51.93 | 21.81 | 4.15 | 5.71 | 18.69 | 20.77 | 1.04 | 0.52 | 1.56 |
| 20 | ಕೋಲಾರ | 292.67 | 219.50 | 73.17 | 175.60 | 73.75 | 14.05 | 19.32 | 63.22 | 70.24 | 3.51 | 1.76 | 5.27 |
| 21 | ಕೊಪ್ಪಳ | 529.93 | 397.45 | 132.48 | 317.96 | 133.54 | 25.44 | 34.98 | 114.47 | 127.18 | 6.36 | 3.18 | 9.54 |
| 22 | ಮಂಡ್ಯ | 400.83 | 300.62 | 100.21 | 240.50 | 101.01 | 19.24 | 26.45 | 86.58 | 96.20 | 4.81 | 2.40 | 7.21 |
| 23 | ಮೈಸೂರು | 488.52 | 366.39 | 122.13 | 293.11 | 123.11 | 23.45 | 32.24 | 105.52 | 117.24 | 5.86 | 2.93 | 8.79 |
| 24 | ರಾಯಚೂರು | 499.04 | 374.28 | 124.76 | 299.42 | 125.76 | 23.95 | 32.94 | 107.79 | 119.77 | 5.99 | 2.99 | 8.98 |
| 25 | ರಾಮನಗರ | 194.23 | 145.67 | 48.56 | 116.54 | 48.95 | 9.32 | 12.82 | 41.95 | 46.61 | 2.33 | 1.17 | 3.50 |
| 26 | ಶಿವಮೊಗ್ಗ | 424.49 | 318.37 | 106.12 | 254.70 | 106.97 | 20.38 | 28.02 | 91.69 | 101.88 | 5.09 | 2.55 | 7.64 |
| 27 | ತುಮಕೂರು | 629.23 | 471.92 | 157.31 | 377.54 | 158.57 | 30.20 | 41.53 | 135.91 | 151.01 | 7.55 | 3.78 | 11.33 |

